ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಆ ನಿಗೂಢ ಮೊಟ್ಟೆಗಳು

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಎಚ್ ಎಲ್ ಸತೀಶ್

ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಆ ನಿಗೂಢ ಮೊಟ್ಟೆಗಳು

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಎಚ್ ಎಲ್ ಸತೀಶ್

Vidya Online
A PARTNERSHIP FOR TEACHERS, CHILDREN AND EDUCATION



ಈ ಕಥೆ, ದಕ್ಷಿಣ ದೆಹಲಿಯ ದಿಂಡು ಕಾಡಿನ ಭಾಗವಾಗಿರುವ ಸಂಜಯ ವನ ಮತ್ತು ಅದರ ಆಸುಪಾಸಿನಲ್ಲಿರುವ ಸಂಸ್ಥೆಗಳ ಆವರಣಗಳಲ್ಲಿ 2010ರ ಏಪ್ರಿಲ್ ಮತ್ತು ಜೂಲೈ ತಿಂಗಳುಗಳ ನಡುವೆ ನಡೆಸಿದ ಅವಲೋಕನೆಗಳನ್ನು ಆಧರಿಸಿದೆ.

ಈ ಪುಸ್ತಕದಲ್ಲಿ ಇರುವ ಚಿತ್ರಗಳು, ಪಕ್ಷಿಯ ಅಥವ ಗೂಡುಗಳ ನಿಜವಾದ ಗಾತ್ರವನ್ನು ತೋರಿಸದೇ ಇರಬಹುದು.






http://vidyaonline.net

“ಹೇ ... ಅಲ್ಲಿ ನೋಡು! ಮೊಟ್ಟೆಗಳು ... ಕೆಂಪು ಟಿಟ್ಟಿಬದ ಮೊಟ್ಟೆಗಳು!”

“ಯಾರು ಹೇಳಿದ್ದು ... ಇವೆಲ್ಲ ಕೆಂಪು ಟಿಟ್ಟಿಬದ ಮೊಟ್ಟೆಗಳು ಅಂತಾ?” ಸದ್ದಿಲದೆ ಮೆಲ್ಲನೆ ತಲೆ ತಗ್ಗಿಸಿಕೊಂಡು ಹೊಗುತಿದ್ದ ಕಂದು ಪಕ್ಷಿ ಗಂಭೀರವಾಗಿ ಕೇಳಿತು.

“ನಾನು, ನಾನೇ ಹಾಗೆ ಹೇಳಿದ್ದು” ಒಂದು ಕ್ಷಣ ಆವಾಕ್ಕಾಗಿದ್ದ ನಾನು ಮೆಲ್ಲಗೆ ಉಸುರಿದೆ.





“ಅವು ಕೆಂಪು ಟಿಟ್ಟಿಬದ ಮೊಟ್ಟೆಗಳೇ ಅಂತ ನಿಂಗೆ ಏಕೆ ಅನ್ನುತ್ತೆ?” ಆ ಹಕ್ಕಿ ತುಸು ಕೋಪದಿಂದಲೇ ನನ್ನನ್ನು ಕೇಳಿತು.

“ನನಗೆ ಅನ್ಸುದು ಮಾತ್ರ ಅಲ್ಲ, ಅವು ಖಂಡಿತವಾಗಿಯೂ ಕೆಂಪು ಟಿಟ್ಟಿಬದ ಮೊಟ್ಟೆಗಳೇ” ನಾನು ಪ್ರತಿಭಟಿಸುತ್ತಾ ಸ್ವಲ್ಪ ಜೋರಾಗಿಯೇ ಹೇಳಿದೆ.

“ಹೂ ... ಅಂದ್ರೆ ನಿನಗೆ ಖಚಿತವಾಗಿ ಗೊತ್ತೋ?”

ಇದ್ಯಾಕೊ ಅತಿಯಾಗಿ ಹೋಗ್ತಾ ಇದೆ ಅಂತ ಅನಿಸಿತು.

ಒಂದು ಕ್ಷುದ್ರ ಪಕ್ಷಿ ನನ್ನನ್ನ ಹೀಗೆ ಗೋಳುಹುಯ್ಯೋದು ಅಂದ್ರೆ ಏನು? ಆಟದ ಮೈದಾನ ದಾಟಿ ಹೋಗುತಿದ್ದೆ. ಮೊಟ್ಟೆಗಳು ಕಾಣಿಸಿಬಿಡ್ತು. ಏನು

ಅದೃಷ್ಟ! ಅವುಗಳನ್ನ ಮತ್ತೆ ನೋಡಿದ್ದಕ್ಕೆ ರೋಮಾಂಚನ ಆಯ್ತು.

ಈ ರೀತಿಯ ಮೊಟ್ಟೆಗಳನ್ನು ಮೊದಲ ಸಲ ನೋಡಿದ್ದು ನೆನಪಿಗೆ ಬಂತು. ಆಗ ನೆಲದ ಮೇಲೆ ಮೊಟ್ಟೆಗಳನ್ನು ನೋಡಿ ನನಗೆ ಆಶ್ಚರ್ಯ ಜೊತೆಗೆ ಸ್ವಲ್ಪ ಭಯ ಒಟ್ಟಿಗೆ ಆಗಿತ್ತು. ಯಾವ ಪ್ರಾಣಿಯ ಮೋಟ್ಟೆಗಳೋ ಇವು? ಒಂದು ಪೊದೆ ಹಿಂದೆ ಅವಿತು ನೋಡುತ್ತಾ ನಿಂತೆ. ನನ್ನ ಅಣ್ಣನೂ ನನ್ನ ಜೊತೆಗೆ ಸೇರಿಕೊಂಡಿದ್ದ. ನೋಡ್ತಾ ಇದ್ದಾಗ, ಹಳದಿ ಕಾಲುಗಳಿದ್ದ ಒಂದು ದೊಡ್ಡ ಹಕ್ಕಿ ಮೊಟ್ಟೆ ಕಡೆಗೆ ಮೆಲ್ಲಗೆ ಸಾಗಿ ಬಂದು. ಆ ಹಕ್ಕಿ ಮೊಟ್ಟೆಗಳ ಮೇಲೆ ಕುಳಿತುಕೊಂಡಾಗ ನನ್ನ ಅಣ್ಣ ಮೆಲ್ಲಗೆ, “ಅದು ಕೆಂಪು ಟಿಟ್ಟಿಬ. ಕಣ್ಣ ಹತ್ತಿರ ಗಂಗೆದೊಗಲು ಕಾಣಿಸುತ್ತಿದೆಯಾ?” ಅಂತ ಪಿಸುಗುಟ್ಟಿದ್ದ.

“ನಾನು ಇಂಥ ಮೊಟ್ಟೆಗಳನ್ನ ಕಾಡಿನಲ್ಲಿ ನೋಡಿದ್ದೀನಿ –”





“ಏನು? ಏನೆಂದೆ? ಈ ಮೊಟ್ಟೆಗಳನ್ನು ನೋಡಿದೀನಿ ಅಂದ್ಯಾ?”

“ನೋಡಿದ್ದೀನಿ, ನಿನ್ನ ಮಾತಿನ ಅರ್ಥ ಏನು?” ನಾನು ಸಿಡುಕಿನಿಂದಲೇ ಕೇಳಿದೆ.

“ಈ ಮೊಟ್ಟೆಗಳು ನನ್ನವು; ಆದ್ರೆ ನಾನು ಖಂಡಿತಾ ಕೆಂಪು ಟಿಟ್ಟಿಬ ಅಲ್ಲ.”

“ನೀನು ಕೆಂಪು ಟಿಟ್ಟಿಬ ಅಲ್ಲ ಅಂತ ನನಗೆ ಗೊತ್ತು. ಆದ್ರೆ ... ಸ್ವಲ್ಪ ಇರು! ಈ ಮೊಟ್ಟೆಗಳು ನಿನ್ನವು ಆಗೋದಿಕ್ಕೆ ಹೇಗೆ ಸಾಧ್ಯ? ನೀನು ಮೊಟ್ಟೆ ಕದಿಯೋದಿಕ್ಕೆ ಬಂದಿರೊ ಕಳ್ಳ ಇರಬೇಕು!”

“ನನ್ನನ್ನ ಕಳ್ಳ ಅಂತ ಕರೆಯೋದಕ್ಕೆ ನಿನಗೆ ಎಷ್ಟು ಧೈರ್ಯ! ಏನು ಸಾಕ್ಷಿ

ಇದೆ ತೋರಿಸು!" ಆ ಹಕ್ಕಿ ಕೋಪದಿಂದ ಘರ್ಜಿಸ್ತು.

"ಏನು, ಸಾಕ್ಷಿ ತೋರಿಸ್ಬೇಕಾ? ಯಾವುದಕ್ಕೆ?" ನಾನು ಕೇಳಿದೆ.

"ನಿನಗೆ ತಾಕತ್ತು ಇದ್ರೆ, ಈ ಮೊಟ್ಟೆಗಳು ನನ್ನವಲ್ಲ ಅಂತ ಸಾಧಿಸಿ ತೋರಿಸು, ನೋಡೋಣ!"

"ಅದು ಹೇಗೆ ತೋರಿಸಲಿ?"

"ಹ! ಹ! ಬೇರೆಯವರನ್ನು ದೂಷಿಸುವುದಕ್ಕೂ ಮೊದಲು ಸತ್ಯ ಏನು ಅಂತ ಮೊದಲು ಖಚಿತವಾಗಿ ತಿಳ್ಕೋಬೇಕು. ಸತ್ಯ ಏನು ಅಂತ ತೋರಿಸುವುದಕ್ಕೆ ಏನಾದ್ರೂ ಒಂದು ವಿಧಾನ ಹುಡುಕು"





“ಸರಿ, ನಾನು ಹೋಗಿ ಅವುಗಳಲ್ಲಿ ಒಂದು ಮೊಟ್ಟೆ ತಂದು ಕೊಡ್ತೀನಿ. ಆಗ ನೀನೇ ನೋಡುವಿಯಂತೆ –”

“ನೀನು ಆ ರೀತಿ ಏನಾದರೂ ಕೆಲ್ಸ ಮಾಡುವುದಕ್ಕೆ ಹೋದೀಯಾ, ಜೋಕೆ!” ಆ ಹಕ್ಕಿ ಬೆದರಿಕೆ ಹಾಕಿತು. “ನಿನ್ನದಲ್ಲದ ಏನನ್ನಾದರೂ ತೆಗೆದುಕೊಳ್ಳುವುದಕ್ಕೆ ನಿನಗೆ ಯಾವ ಹಕ್ಕು ಇದೆ?”

ಹೀಗೆ ಗೋಜಲಿನಲ್ಲಿ ಸಿಕ್ಕಿಹಾಕಿಕೊಂಡಿದ್ದಕ್ಕೆ ನನ್ನನ್ನು ನಾನೇ ಶಪಿಸಿಕೊಂಡೆ. “ಆಯ್ತು, ಆ ಮೊಟ್ಟೆಗಳನ್ನಾಗಲೀ ಈ ಮೊಟ್ಟೆಗಳನ್ನಾಗಲೀ ಮುಟ್ಟುವುದಕ್ಕೆ ಹೋಗುವುದಿಲ್ಲ ಅಂತ ನಿನಗೆ ಮಾತು ಕೊಡ್ತೀನಿ. ಅಷ್ಟೇ ಅಲ್ಲ, ಈ ಮೊಟ್ಟೆಗಳ ಗುಟ್ಟನ್ನ ಪರಿಹಾರಾನೂ ಮಾಡ್ತೀನಿ. ನೀನು ಇಲ್ಲೇ ಕಾಯ್ತಾ ಇರು. ಯೋಚಿಸಿ ಯಾವುದಾದರೂ ಉಪಾಯ ಕಂಡುಹಿಡಿಯುವವರೆಗೆ”

ನಾನು ಮತ್ತೆ ಕಾಡಿಗೆ ಹೋದೆ. ಅದೊಂದು ನಗರದಲ್ಲಿದ್ದ ಕಾಡು. ನಿಸರ್ಗವನ್ನು ಸಂರಕ್ಷಿಸಿ ಇಡಲಾಗಿದ್ದ ವಿಶಾಲ ಪ್ರದೇಶ ಅದು. ಆ ಕಾಡು ನಗರದ ಒಳವಲಯದಲ್ಲಿ ಇದ್ದುದರಿಂದ ಅಪಾಯವುಂಟುಮಾಡಬಹುದಾದ ಯಾವುದೇ ಪ್ರಾಣಿ ಅಲ್ಲಿ ಇರಲಿಲ್ಲ. ಅದು ವಿಶ್ರಾಂತಿ ಪಡೆದು ಮನಸ್ಸನ್ನು ಹಗುರಗೊಳಿಸಿಕೊಳ್ಳಲು ನಿರ್ಮಿಸಿದ್ದ ತಾಣ. ಜನ ಅಲ್ಲಿಗೆ ಬಂದು ನಡಿಗೆಯಲ್ಲೋ ವ್ಯಾಯಾಮದಲ್ಲೋ ತೊಡಗುತ್ತಿದ್ದರು. ಆ ಕಾಡಿನೊಳಗೆ ಒಂದು ಕೊಳವೂ, ಅದರ ಪಕ್ಕದಲ್ಲಿ ಒಂದು ಕೈತೋಟವೂ ಇದೆ. ಮುಂಗಾರು ಕಳೆದಂತೆ ಕೊಳದ ನೀರು ಕಡಿಮೆ ಆಗುತ್ತದೆ. ಛಳಿಗಾಲ ಮುಗಿಯುವ ಹೊತ್ತಿಗೆ ಮರಗಳು ತಮ್ಮ ಎಲೆಗಳನ್ನು ಉದುರಿಸಿಕೊಳ್ಳುತ್ತವೆ, ಕಾಡು ಸ್ವಲ್ಪ ತೆಳುವಾಗುತ್ತದೆ. ಈಗ ಬೇಸಿಗೆಯ ಆರಂಭದ ದಿನಗಳು. ಪರಿಶೋಧನೆಗೆ ಹೇಳಿ ಮಾಡಿಸಿದಂತಿದ್ದ ಸಮಯ. ಕಳೆದ ವಾರವಷ್ಟೇ ನಡೆಸಿದ ಪರಿಶೋಧನೆ ನಮ್ಮನ್ನು ಮೊಟ್ಟೆಗಳ ಕಡೆಗೆ ಸೆಳೆದಿದ್ದುವು.





ಆ ಮೊಟ್ಟೆಗಳು ಒಂದು ತುದಿ ತುಸು ಚೂಪಾಗಿಯೂ ಇನ್ನೊಂದು ತುದಿ ಗುಂಡಗೂ ಇದ್ದುವು. ಹೂವಿನ ದಳಗಳಂತೆ ಕಿರಿದಾದ ತುದಿ ಕೇಂದ್ರದ ಕಡೆಗೂ ಗುಂಡನೆಯ ತುದಿ ಹೊರಮುಖವಾಗಿಯೂ ಚಾಚಿಕೊಂಡಿದ್ದುವು. ಅವುಗಳ ಮೇಲೆಲ್ಲಾ ಚುಕ್ಕೆಗಳು ಮತ್ತು ಸಿಡಿಬಟ್ಟುಗಳ ಅಲಂಕಾರ ಅಸಮವಾಗಿ ಹರಡಿಕೊಂಡಿದ್ದುವು. ಗುಂಡನೆಯ ತುದಿಯಲ್ಲಿ ಕಡು ಮತ್ತು ನಸು ಕಂದುಬಣ್ಣದ ಗುರುತುಗಳು ಸ್ವಲ್ಪ ಹೆಚ್ಚು ಇದ್ದುವು.

ಅಲ್ಲಿಯೇ ಬಿದ್ದಿದ್ದ ಒಂದು ಕಡ್ಡಿಯನ್ನು ಕೈಗೆತ್ತಿಕೊಂಡು ಮೊಟ್ಟೆಯ ಉದ್ದದ ಅಳತೆಗೆ ಸರಿಯಾಗಿ ಮುರಿದೆ. ಅನಂತರ, ಸಾಧ್ಯವಿರುವ ಎಲ್ಲ ಕೋನಗಳಿಂದ ಆ ಮೊಟ್ಟೆಗಳನ್ನು ನನ್ನ ಕ್ಯಾಮರಾದಲ್ಲಿ ಸೆರೆ ಹಿಡಿದೆ – ಅಪರಾಧತಜ್ಞನಂತೆ! “ನನ್ನ ಕೇಸಿನ ಪರವಾಗಿ ಈಗ ನನ್ನಲ್ಲಿ ಸಾಕಷ್ಟು ಪುರಾವೆಗಳು ಇವೆ!” ನನಗೆ ನಾನೇ ಹೇಳಿಕೊಳ್ಳುತ್ತಾ ಆಟದ ಮೈದಾನದ ಕಡೆಗೆ ಸರಸರನೆ ಧಾವಿಸಿದೆ.

ಎಲ್ಲಿ ಆ ಮೊಟ್ಟೆಗಳನ್ನು ನೋಡಿದ್ದೆನೋ ಅದೇ ಜಾಗಕ್ಕೆ ಬಂದಿದ್ದೆ. ಆದರೆ ಎಷ್ಟು ಕಷ್ಟಪಟ್ಟು ಹುಡುಕಿದರೂ ಆ ಮೊಟ್ಟೆಗಳು ಅಲ್ಲೆಲ್ಲೂ ನನಗೆ ಕಾಣಸಿಗಲಿಲ್ಲ.

“ಇದೇಕೋ ಒಗಟಾಯಿತಲ್ಲ!” ಎಂದು ಗಟ್ಟಿಯಾಗಿ ಹೇಳಿಕೊಂಡೆ, ನಿಂತಲ್ಲಿಯೇ ತಲೆಕೆರೆಯುತ್ತಾ. ಆ ಕೊಳದ ಹತ್ತಿರ ಮೊಟ್ಟೆಗಳನ್ನು ಪತ್ತೆ ಮಾಡುವುದು ಕಷ್ಟ ಎನಿಸಿರಲಿಲ್ಲ. ಏಕೆಂದರೆ ಆ ಕೊಳ ಮತ್ತು ಮರಗಳ ನಡುವೆ ಇದ್ದ ನೆಲ ಬಲು ಕಿರಿದಾಗಿತ್ತು.  ಅದಕ್ಕಿಂತ ಮುಖ್ಯವಾಗಿ, ಆ ಮೊಟ್ಟೆಗಳು ಬಿದಿರು ಮೆಳೆಗಳ ಪಕ್ಕದಲ್ಲಿಯೇ ಇದ್ದ ಚಿಕ್ಕ ದಿಣ್ಣೆಯ ಮೇಲಿದ್ದುವು. ಅಲ್ಲಿಗೆ ಹೋಗುವುದು ನನಗೆ ಗೊತ್ತಿತ್ತು. ಆದರೆ ಇಲ್ಲಿ! ಅಷ್ಟು ವಿಶಾಲವಾದ ಆಟದ ಮೈದಾನದಲ್ಲಿ ನನಗೆ ಸಹಾಯ ಮಾಡುವಂಥ ಯಾವುದೇ ಗುರುತುಗಳು ಇರಲಿಲ್ಲ.



“ಮೊಟ್ಟೆಗಳನ್ನು ಹುಡುಕುತ್ತಿದ್ದೀಯಾ?” ಪಕ್ಕದಲ್ಲಿಯೇ ನಗುತ್ತಾ ನಿಂತಿದ್ದ ಆ ಹಕ್ಕಿ ಕೇಳಿತು.

“ತಮಾಷೆಯಾಗಿದೆ, ಅರೇ ... ನಿನ್ನನ್ನು ಗಮನಿಸಲೇ ಇಲ್ಲವಲ್ಲಾ ನಾನು!”
“ಮೊಟ್ಟೆಗಳನ್ನೂ ಗಮನಿಸುವುದು ಸಾಧ್ಯವಾಗಲಿಲ್ಲ, ಅಲ್ಲವೇ?”

“ಹೌದು, ಅವು ಎಲ್ಲಿ ಹೋದುವು?”

“ಅಲ್ಲೇ ... ನಿನ್ನ ಮೂಗಿನ ಕೆಳಗೇ ಇವೆ! ಇಲ್ಲಿ ನೋಡು!”

ನಂಬಲು ಅಸಾಧ್ಯವಾಗಿತು. ನನ್ನ ಮುಂದೆಯೇ ಇದ್ದ ಮೊಟ್ಟೆಗಳನ್ನು ನಾನು ಗಮನಿಸಿರಲಿಲ್ಲ. ನಮ್ಮ ಶಿಕ್ಷಕರು ಬಣ್ಣ ಬದಲಿಸುವ ಗೋಸುಂಬೆಯ ಬಗ್ಗೆ

ಹೇಳುತ್ತಿದ್ದಾಗ ವೇಷ ಬದಲಿಸುವ ಗೋಸುಂಬೆಯನ್ನು ಮನದಾಳದಲ್ಲಿ ಕಲ್ಪಿಸಿಕೊಳ್ಳುವುದಕ್ಕೆ ನಾನು ಕಷ್ಟಪಟ್ಟಿದ್ದೆ. ರೂಪ ಮರೆಸಿಕೊಳ್ಳುವ ವಿದ್ಯಮಾನಕ್ಕೆ ಈಗ ನನಗೊಂದು ಒಳ್ಳೆಯ ನಿದರ್ಶನ ಸಿಕ್ಕಿತ್ತು!

ನಾನು ತೀವ್ರ ದಿಗ್ಭ್ರಮೆಗೆ ಒಳಗಾಗಿದ್ದೆ. ಸುಧಾರಿಸಿಕೊಳ್ಳುವುದಕ್ಕೆ ನನಗೆ ತುಸು ಹೊತ್ತು ಹಿಡಿಯಿತು. ಜೇಬಿನಿಂದ ಅಳತೆಮಾಡಿ ಇಟ್ಟುಕೊಂಡಿದ್ದ ಆ ಕಡ್ಡಿಯನ್ನು ಹೊರತೆಗೆದೆ. ಅದನ್ನು ಅಲ್ಲಿದ್ದ ಒಂದು ಮೊಟ್ಟೆಯ ಮೇಲೆ ಮೆಲ್ಲಗೆ ಇಟ್ಟೆ. ಇನ್ನಷ್ಟು ಆಶ್ಚರ್ಯ, ಇನ್ನಷ್ಟು ಗೊಂದಲ ನನಗಾಯಿತು. “ಈ ಮೊಟ್ಟೆಗಳು ಆ ಮೊಟ್ಟೆಗಳಿಗಿಂತ ಗಾತ್ರದಲ್ಲಿ ಚಿಕ್ಕವು” ತೀರಾ ಪೇಲವ ಧ್ವನಿಯಲ್ಲಿ ಹೇಳಿದೆ. ಕ್ಯಾಮರಾ ತೆಗೆದು ಅದರಲ್ಲಿ ಸೆರೆ ಹಿಡಿದಿದ್ದ ಮೊಟ್ಟೆಗಳ ಚಿತ್ರಗಳನ್ನು ಗಮನಿಸಿದೆ. ಈ ಮೊಟ್ಟೆಗಳನ್ನು ಹೇಗೆ ತುಲನೆ ಮಾಡುವುದು? ಅವುಗಳ ಬಣ್ಣಗಳನ್ನು ಹೊಂದಿಸಿ ನೋಡುವುದು ಹೇಗೆ?





ಏನೂ ಸ್ಪಷ್ಟವಾಗಿರಲಿಲ್ಲ. ಆಗ ಇದ್ದಕ್ಕಿದ್ದಂತೆ ಒಂದು ಯೋಚನೆ ಹೊಳೆಯಿತು. “ಗಂಗೆದೊಗಲು ಅಂದ್ರೆ ಏನು ಅಂತಾ ಹೇಳ್ತೀಯಾ?” ಆ ಪಕ್ಷಿಯನ್ನು ಕೇಳಿದೆ.

“ಖಂಡಿತಾ ಹೇಳ್ತೀನಿ. ಕೆಲವು ಪಕ್ಷಿಗಳಲ್ಲಿ ಕಂಡುಬರುವ ಮಾಂಸಲವಾದ, ಕಡುಬಣ್ಣದ ಚರ್ಮದ ಮಡಿಕೆಗೆ ಗಂಗೆದೊಗಲು ಅಂತಾರೆ. ಉದಾಹರಣೆಗೆ ಹುಂಜ. ಅದರ ಗಂಗೆದೊಗಲು ಸುಕ್ಕು ಸುಕ್ಕಾಗಿ ಇರತ್ತೆ.”

“ಓ, ಗೊತ್ತಾಯ್ತು, ಗೊತ್ತಾಯ್ತು! ಹಾಗಾದ್ರೆ ನೀನು ಹಳದಿ ಟಿಟ್ಟಿಬ. ಇವೆಲ್ಲಾ ನಿನ್ನದೇ ಮೊಟ್ಟೆಗಳು!” ಉತ್ಸಾಹದಿಂದ ಹೇಳಿದೆ.

“ನೀನು ಹೇಳಿದ ಎರಡೂ ಮಾತುಗಳು ಸರಿಯಾಗಿವೆ! ನಮಗೂ ಕೆಂಪು

ಟಿಟ್ಟಿಬಗಳಿಗೂ ಇರುವ ವ್ಯತ್ಯಾಸವನ್ನು ನೀನು ಗುರುತಿಸಿದ್ದಕ್ಕೆ ನನಗೆ ತುಂಬಾ ಸಂತೋಷ ಆಗಿದೆ. ನಮ್ಮಿಬರಲ್ಲಿ ನಮ್ಮಗಳ ಗಾತ್ರ ತುಸು ಕಡಿಮೆ. ನೀನೇ ಗಮನಿಸಿದ ಹಾಗೆ, ನಮ್ಮ ಮತ್ತು ಅವುಗಳ ಮೊಟ್ಟೆಗಳಲ್ಲಿ ಸಾಮ್ಯತೆ ಇದೆ ಆದರೆ ಅವು ಪರಿಪೂರ್ಣವಾಗಿ ಸದೃಶವಾಗಿರುವುದಿಲ್ಲ!" ಹಳದಿ ಟಿಟ್ಟಿಬ ಎಲ್ಲ ವಿಷಯಗಳ ಸಾರವನ್ನು ಸಂಕ್ಷಿಪ್ತವಾಗಿ ಹೇಳಿ ಮುಗಿಸಿತ್ತು.

"ಆದರೆ, ನೀವುಗಳು ಏಕೆ ಗೂಡು ಕಟ್ಟುವುದಿಲ್ಲ ಎಂಬುದೇ ನನಗೆ ಅರ್ಥವಾಗ್ತಿಲ್ಲ.  ಗೂಡುಗಳೊಳಗೆ ನಿಮ್ಮ ಮೊಟ್ಟೆಗಳು ಮತ್ತು ಮರಿಗಳು ಹೆಚ್ಚು ಸುರಕ್ಷಿತವಾಗಿ ಇರಬಹುದು, ಅಲ್ಲವೇ?"

"ಓ, ನೀನು ಒಬ್ಬ ಒಳ್ಳೇ ಪತ್ತೆದಾರ ಅಂತ ನಾನು ಅಂದುಕೊಳ್ಳುತ್ತಿರುವಾಗಲೇ ತೋರಿಸಿಬಿಟ್ಟೆಯಲ್ಲ ನಿನ್ನ ಪ್ಯಾದೆ ಗುಣವನ್ನ?" ನನ್ನ ತಿಳಿವಳಿಕೆಯ ಬಗ್ಗೆ





ಬಚ್ಚಿಡಲಾಗದ ನಿರಾಸೆಯೊಡನೆ ಹೇಳಿತು. “ನೀನು ಕೇವಲ ನೋಡುತ್ತೀಯೆ, ಆದರೆ ಸೂಕ್ಷ್ಮವಾಗಿ ಏನನ್ನೂ ಗಮನಿಸುವುದಿಲ್ಲ” ಎಂಬ ಶೆರ್ಲಾಕ್ ಹೋಮನ ಮಾತುಗಳನ್ನು ಉಸುರುತ್ತಾ ಆ ಪಕ್ಷಿ ಮುನಿಸಿಕೊಂಡು ಅಲ್ಲಿಂದ ಹಾರಿಹೋಯಿತು.

ನನ್ನ ಬಗ್ಗೆ ಆಡಿದ ಅವಹೇಳನಕಾರಿ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ನಾನು ಅಲ್ಲಿಯೇ ನಿಂತೆ. ಒಂದು ಸುತ್ತು ಹಾರಿ ಮತ್ತೆ ನಾನಿದ್ದಲ್ಲಿಗೇ ಬಂದು ಬಲು ಗಾಂಭೀರ್ಯದಿಂದ ಆ ಹಕ್ಕಿ ಆದೇಶಿಸಿತು: “ನನ್ನ ಮೊಟ್ಟೆಗಳನ್ನು ಮತ್ತೆ ನೋಡು. ಅವುಗಳ ಸುತ್ತ ಏನಾದರೂ ನಿನಗೆ ಕಾಣಿಸುತ್ತಿದೆಯೇ?”

ಆ ಪಕ್ಷಿ ಏನನ್ನು ಗಮನಿಸುವಂತೆ ನನಗೆ ಹೇಳುತ್ತಿದೆ ಎಂಬುದೇ ನನಗೆ ಸ್ಪಷ್ಟವಿರಲಿಲ್ಲ. “ಅಲ್ಲೇನು ಕಾಣುಸ್ತಿದೆ ಅಂದ್ರೆ .... ಕಲ್ಲುಗಳು, ಕಡ್ಡಿಗಳು, ಮತ್ತೆ

ಯಾವುದೋ ಕಾಯಿ ... ಏ! ಇರು! ಎಷ್ಟೊಂದು ಕಲ್ಲುಗಳು, ಇದನ್ನು ಯಾರಾದರೂ ಜೋಡಿಸಿದ್ದಾರೋ ಅಥವಾ ಬೇರೆ ಏನಿರ ಬಹುದು?" ಪ್ರಶ್ನಾರ್ಥಕ ಚಿಹ್ನೆ ಹೊತ್ತ ಮುಖದೊಂದಿಗೆ ಆ ಪಕ್ಷಿಯತ್ತ ನೋಡಿದೆ.

"ನೀನು ಗಮನಿಸಿದ್ದು ಸರಿಯಾಗಿದೆ. ಅದು ನಮ್ಮ ಗೂಡು. ನಾವು ಗೂಡು ಕಟ್ಟುವುದೇ ಹೀಗೆ. ಇದೇ ಥರಾ ಇನ್ನೂ ಕೆಲವು ಪಕ್ಷಿಗಳು ಗೂಡು ಕಟ್ಟುತ್ತವೆ. ನೀನು ನೋಡಿರಬೇಕಲ್ಲ, ಆ ಕೆಂಪು ಟಿಟ್ಟಿಬಗಳ ಗೂಡು–"

ಆ ಪಕ್ಷಿ ಹೇಳಿದ್ದು ಕೇಳಿ ನನಗೆ ವಿಸ್ಮಯವಾಯಿತು: "ಏನು? ಇದನ್ನು ನೀನು ಗೂಡು ಅಂತ ಕರೀತೀಯಾ!"

"ಓ! ಗೂಡುಗಳು ಮರಗಳಲ್ಲಿಯೇ ಇರಬೇಕು ಅಂತಾನಾ ನಿನ್ನ ಅಭಿಪ್ರಾಯ?





ಗೂಡು ಅಂದರೇನು ಅಂತಾ ನೀನು ತಿಳ್ಕೊಂಡಿದೀಯಾ?” ಆ ಹಕ್ಕಿ ನನ್ನನ್ನೇ ಪ್ರಶ್ನಿಸಿತು.

“ಗೂಡು ಅಂದ್ರೆ ... ಮೊಟ್ಟೆಗಳನ್ನು ಇಟ್ಟುಕೊಳ್ಳುವುದಕ್ಕೆ ಇರೋ ಒಂದು ಜಾಗ .... ಅಷ್ಟೇ ತಾನೇ?”

“ಅಷ್ಟೇ ಅಲ್ಲ .... ಅದು ಮೊಟ್ಟೆ ಮತ್ತು ಮರಿಗಳ ರಕ್ಷಣೆ ಕೂಡ ಮಾಡ್ಬೇಕು. ನಮ್ಮ ಗೂಡು ನಮ್ಮ ಮೊಟ್ಟೆಗಳನ್ನು ರಕ್ಷಿಸುತ್ತೆ. ಮೊಟ್ಟೆಗಳು ಎಲ್ಲಿವೆ ಅಂತ ಗೊತ್ತೇ ಆಗುವುದಿಲ್ಲ. ಏಕೆ? ನೀನೇ ಈಗ ಮೋಸ ಹೋದ್ಯಲ್ಲಾ!”

ಅನಂತರ ಟಿಟ್ಟಿಬಗಳು ಹೇಗೆ ಗೂಡುಗಳನ್ನು ಮಾಡಿಕೊಳ್ಳುತ್ತವೆ ಎಂಬುದರ ಬಗ್ಗೆ ನನಗೆ ಚೆನ್ನಾಗಿ ಮತ್ತು ಸುಂದರವಾಗಿ ಪಾಠ ಹೇಳಿಕೊಟ್ಟಿತು.

ಮೊದಲು ಅವು ತಮ್ಮ ದೇಹದ ನೆರವಿನಿಂದ ನೆಲ ಕೆರೆದು ಒಂದು ಸಣ್ಣ ತಗ್ಗು ಪ್ರದೇಶ ನಿರ್ಮಿಸುತ್ತವೆ. ಅನಂತರ ಅವು ಸುತ್ತಲಿನ ಪ್ರದೇಶದೊಂದಿಗೆ ಐಕ್ಯಗೊಳ್ಳುವಂಥ ಕಲ್ಲುಗಳು, ಮಣ್ಣುಹೆಂಟೆ, ಕಡ್ಡಿಗಳು, ಹುಲ್ಲುಗಳಂಥ ಪದಾರ್ಥಗಳನ್ನು ಹೆಕ್ಕಿ ತಂದು ಕೆರೆದು ನಿರ್ಮಿಸಿದ ತಗ್ಗು ಪ್ರದೇಶದ ಸುತ್ತ ಜೋಡಿಸುತ್ತವೆ.

ಗೂಡು ನಿರ್ಮಿಸುವ ಜಾಗದ ಆಯ್ಕೆಯಲ್ಲಿ ಅವು ತುಂಬಾ ಎಚ್ಚರ ವಹಿಸುತ್ತವೆ. ಅವುಗಳ ಗೂಡುಗಳು ಸುಲಭವಾಗಿ ಕಾಣದಂತೆ ಮಾಡುವಂಥ ಸಹಜ ತಾಣಗಳನ್ನೇ ಅವು ಆರಿಸುತ್ತವೆ.

ಆ ಹಕ್ಕಿ ಮತ್ತೆ ಮುಂದುವರಿಯುತ್ತಾ ಹೇಳಿತು: "ನಮ್ಮ ಮೊಟ್ಟೆಗಳಿಗೆ ಹೊಳಪಿಲ್ಲ. ಅವು ಸ್ವಲ್ಪ ಹೆಚ್ಚು-ಕಡಿಮೆ ಸುತ್ತಲೂ ಜೋಡಿಸಿ ಇಟ್ಟಿರುವ





ಕಲ್ಲುಗಳಂತೆಯೇ ಇರುತ್ತವೆ."

ನಾನೂ ಎರಡೂ ಕಡೆ ಮೊಟ್ಟೆಗಳನ್ನು ನೋಡಿದ್ದೆ. ಆದಾಗ್ಯೂ ಈ ಪಕ್ಷಿಗಳು ಕಲ್ಲುಗಳು ಮತ್ತು ಕಡ್ಡಿಗಳನ್ನು ಜೋಡಿಸಿ ನೆಲದಲ್ಲಿ ಗೂಡು ಕಟ್ಟುವುದು ನನ್ನ ಕಲ್ಪನೆಗೆ ಬಂದಿರಲಿಲ್ಲ.

ಆದರೂ ಅದೇಕೋ ಆ ಗೂಡುಗಳು ನನಗೆ ಸರಿ ಎನಿಸಲಿಲ್ಲ.

"ನೀವು ಕಟ್ಟುವ ಗೂಡುಗಳು ಮೊಟ್ಟೆಗಳನ್ನೇನೋ ರಕ್ಷಿಸುತ್ತವೆ ಎಂದಿಟ್ಟುಕೊಳ್ಳೋಣ, ನಿಮ್ಮ ಮರಿಗಳ ಕಥೆ ಏನು? ನಿಮ್ಮ ಮೊಟ್ಟೆಗಳ ಚಿಪ್ಪೊಡೆದುಕೊಂಡು ಹೊರಬರುವ ಆ ಎಳೆ ಮರಿಗಳ ಗತಿ ಏನು?"

“ಮೊಟ್ಟೆಯಿಂದ ಮರಿಗಳು ಹೊರಬಂದ ಮೇಲೆ ನಮಗೆ ಗೂಡು ಬೇಕಾಗುವುದೇ ಇಲ್ಲ” ಎಂದು ಘೋಷಿಸುತ್ತಾ ಆ ಹಳದಿ ಟಿಟ್ಟಿಬ ಅಲ್ಲಿಂದ ಹಾರಿಹೋಯಿತು.

***





ಹಳದಿ ಟಿಟ್ಟಿಬ



ಆಟದ ಮೈದಾನದಲ್ಲಿ ಹಳದಿ ಟಿಟ್ಟಿಬದ ಗೂಡು ಮತ್ತು ಮೊಟ್ಟೆಗಳು



ಹಳದಿ ಟಿಟ್ಟಿಬದ ಗೂಡು ಇದ್ದ ಆಟದ ಮೈದಾನ



ಮತ್ತೊಂದು ಹಳದಿ ಟಿಟ್ಟಿಬದ ಗೂಡು



ಮೊಟ್ಟೆಗಳಿಗೆ ಕಾವುಕೊಡುತ್ತಿರುವ ಹಳದಿ ಟಿಟ್ಟಿಬ



ಕೆಂಪು ಟಿಟ್ಟೀಬ



ಮತ್ತೊಂದು ಕೆಂಪು ಟಿಟ್ಟಿಬದ ಗೂಡು



ಮೊಟ್ಟೆಗಳಿಗೆ ಕಾವುಕೊಡುತ್ತಿರುವ ಕೆಂಪು ಟಿಟ್ಟಿಬ



## ಇತರ ಶೀರ್ಷಿಕೆಗಳು

ಒಳ್ಳೆಯ ಕೆಲಸ

ಅನುಕೂಲದ ಆಶ್ರಯ

ಎಲ್ಲಿದ್ದೀಯಪ್ಪಾ ಕಾಪರ್‌ಸ್ಮಿತ್!

Vidya Online

A PARTNERSHIP FOR TEACHERS, CHILDREN AND EDUCATION

Visit http://vidyaonline.net for more titles